ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 18 ನೇ ಮಾರ್ಚ್, 2020

ಆಸ್ತಿ ನೋಂದಣಿಗೆ ಆಗುತ್ತಿರುವ ಸಮಸ್ಯೆಗಳ ಬಗ್ಗೆ

ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

1172 (1561) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಆಸ್ತಿ ನೋಂದಣಿ ವೇಳೆ ಅಕ್ರಮಗಳನ್ನು ತಡೆಗಟ್ಟುವ ಸಲುವಾಗಿ ಉಪನೋಂದಣಿ ಕಛೇರಿಗಳಲ್ಲಿ ಸರ್ಕಾರ ಜಾರಿಗೆ ತಂದಿರುವ ಒಟಿಪಿ ವ್ಯವಸ್ಥೆ ಗಮನಾರ್ಹವಾದದ್ದು ; ಇಂತಹ ವ್ಯವಸ್ಥೆಯಿಂದ ಜನರು ಒಂದು ನೋಂದಣಿಗೆ ಎರಡು ತಾಸಿಗೂ ಅಧಿಕ ಸಮಯ ಕಾಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; (ವಿವರ ನೀಡುವುದು)

(ಆ) ಈ ಪ್ರಕ್ರಿಯೆ ಬಂದ ನಂತರ ನೋಂದಣಿಗಳು ಜಾಸ್ತಿಯಾಗಿವೆಯೇ ಅಥವಾ ಕಡಿಮೆಯಾಗಿದೆಯೇ ; (ವಿವರ ನೀಡುವುದು)

(ಇ) ಒಂದು ನೋಂದಣಿ ಮಾಡಿಸಲು ಕಛೇರಿಗೆ ನೀಡಿದರೆ 15 ದಿನಗಳ ನಂತರ ನೋಂದಣಿ ಮಾಡುವುದಾಗಿ ಮುಂದಿನ ದಿನಾಂಕಗಳನ್ನು ನೀಡಿ ವಾಪಸ್ ಕಳುಹಿಸಲಾಗುತ್ತಿರುವುದಕ್ಕೆ ಕಾರಣಗಳೇನು ;

(ಈ) ಹೊಸ ತಂತ್ರಾಂಶ ಅಳವಡಿಕೆಯಿಂದ ಸರಾಸರಿ 50% ನೋಂದಣಿ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡಿರುವ ಕ್ರಮಗಳೇನು ;

(ಉ) ಈ ತಂತ್ರಾಂಶ ಅಳವಡಿಕೆಯಿಂದ ದಿನೇ ದಿನೇ ಸರ್ವರ್ ಸಮಸ್ಯೆಗಳಿಂದ ನೋಂದಣಿಗಳಾಗದೆ ಸಾರ್ವಜನಿಕರು ಪರದಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಊ) ಸದರಿ ನೋಂದಣಿ ಆಪರೇಟರ್‌ಗಳ ಕೊರತೆಯಿದ್ದು, ಇದಕ್ಕೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ ಮತ್ತು ಹಳೆಯ ಕಂಪ್ಯೂಟರ್‌ಗಳಿಗೆ ಹೊಸ ತಂತ್ರಾಂಶ ಅಳವಡಿಸಲು ಸಾಧ್ಯವಾಗದೆ ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಎಲ್ಲಾ ಉಪನೋಂದಣಾಧಿಕಾರಿ ಕಛೇರಿಗಳಿಗೆ ಹೊಸ ಕಂಪ್ಯೂಟರ್‌ಗಳನ್ನು ನೀಡಿ ಹೊಸ ತಂತ್ರಾಂಶವನ್ನು ಅಳವಡಿಸಲಾಗಿದೆಯೇ ?